ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1433

ಸದಸ್ಯರ ಹೆಸರು : ಶ್ರೀ ಸಿ.ಎಂ.ಇಬ್ರಾಹಿಂ

(ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸುವ ದಿನಾಂಕ : 23.09.2021.

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| (ಅ) | ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯಲ್ಲಿ 2021-22 ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ ಸರ್ಕಾರಿ ಕಾರ್ಯಕ್ರಮಗಳು, ಪ್ರಚಾರ ಮತ್ತು ಮಾಹಿತಿಗಾಗಿ ಎಷ್ಟು ಹಣ ಬಿಡುಗಡೆ ಮಾಡಲಾಗಿದೆ. | ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯಲ್ಲಿ 2021-22 ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ ಸರ್ಕಾರಿ ಕಾರ್ಯಕ್ರಮಗಳು, ಪ್ರಚಾರ ಮತ್ತು ಮಾಹಿತಿ , ಶಿಕ್ಷಣ ಹಾಗೂ ಸಂವಹನೆಗಾಗಿ ರೂ.150.00 ಕೋಟಿಗಳ ಅನುದಾನಕ್ಕೆ ಅನುಮೋದನೆ ನೀಡಿದ್ದು, ಇಲ್ಲಿಯವರೆಗೆ ಎರಡು ಕಂತಿನ ಮೊತ್ತ ರೂ.75.00 ಕೋಟಿಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದೆ. |
| (ಆ) | ವಿವಿಧ ಪತ್ರಿಕೆಗಳು ಹಾಗೂ ಡಿಜಿಟಲ್ ಮೀಡಿಯಾಗಳಿಗೆ ಎಷ್ಟು ಹಣವನ್ನು ಕಾಯ್ದಿರಿಸಲಾಗಿದೆ : | ವಿವಿಧ ಮುದ್ರಣ ಹಾಗೂ ವಿದ್ಯುನ್ಮಾನ ವಾಹಿನಿ ಮತ್ತು ಡಿಜಿಟಲ್ ಕ್ಯಾಂಪೇನ್ ಗಳ ಮೂಲಕ ಸರ್ಕಾರದ ವಿವಿಧ ಯೋಜನೆಗಳ ಕುರಿತು ಜನಸಾಮಾನ್ಯರಿಗೆ ಅರಿವು ಮೂಡಿಸಲು ಪ್ರಕಟವಾಗುವ ಜಾಹೀರಾತು ವೆಚ್ಚ ಭರಿಸಲು ಒಟ್ಟು ರೂ.60.00 ಕೋಟಿ ಅನುದಾನವನ್ನು ಕಾಯ್ದಿರಿಸಲಾಗಿದೆ. |
| ಇ) | ಈಯೋಜನೆಯನ್ನು ಅನುಷ್ಠಾನಗೊಳಿಸಲು ಸಮಿತಿಯನ್ನು ರಚಿಸಲಾಗಿದೆಯೇ : | ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಸಮಿತಿಯನ್ನು ರಚಿಸಲಾಗಿರುವುದಿಲ್ಲ. ಸರ್ಕಾರದ ಆದೇಶ ಸಂಖ್ಯೆ : ಕೆಸಿಐ /ಪಿಐಪಿ/134/2021 (ಭಾಗ1), ದಿನಾಂಕ : 21-6-2021 ರ ಆದೇಶದಲ್ಲಿ ಕ್ರಿಯಾ ಯೋಜನೆಯನ್ನು ಅನುಮೋದಿಸಲಾಗಿದೆ. ಅದರಂತೆ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲಾಗುತ್ತದೆ. |
| ಈ) | ಸರ್ಕಾರದ ಯಾವ ಯಾವ ಇಲಾಖೆಗಳಿಗೆ ಜಾಹೀರಾತು ನೀಡಲಾಗಿದೆ? (ವಿವರಗಳನ್ನು ನೀಡುವುದು) | ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯಿಂದ ಯಾವುದೇ ಇಲಾಖೆಗಳಿಗೆ ಜಾಹೀರಾತು ನೀಡುವುದಿಲ್ಲ. ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯಿಂದ ರಾಜ್ಯ ಮಟ್ಟದ ವಿಶೇಷ ಸಭೆ, ಸಮಾರಂಭಗಳು, ಜಯಂತಿ ಆಚರಣೆಗಳು, ಸರ್ಕಾರದ ವಾರ್ಷಿಕ ದಿನಾಚರಣೆ, ಪ್ರಮುಖ ಯೋಜನೆಗಳ ಲೋಕಾರ್ಪಣೆ ಹಾಗೂ ರಾಜ್ಯ/ರಾಷ್ಟ್ರೀಯ ಹಬ್ಬ/ದಿನಾಚರಣೆಗಳು ಕುರಿತ ಜಾಹೀರಾತುಗಳನ್ನು ಮಾಧ್ಯಮಗಳಿಗೆ ಬಿಡುಗಡೆ ಮಾಡಲಾಗುತ್ತದೆ. |

ಸಂಖ್ಯೆ: ಕೆಸಿಐ-ಪಿಐಪಿ/260/2021

(ಬಸವರಾಜ ಬೊಮ್ಮಾಯಿ)

ಮುಖ್ಯಮಂತ್ರಿ